ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಮಂಗಳವಾರ, ದಿನಾಂಕ: 29ನೇ ಸೆಪ್ಟಂಬರ್, 2020

ತೋಟಗಾರಿಕೆ ಇಲಾಖೆಯ ಕಟ್ಟಡಗಳು ಮತ್ತು ಜಮೀನಿನ ಬಳಕೆಯ ಬಗ್ಗೆ

ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ (ನಾಮನಿರ್ದೇಶನ ಹೊಂದಿದವರು ):-

935(1062) ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಗೆ ಮತ್ತು ರೇಷ್ಮೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದಲ್ಲಿ ತೋಟಗಾರಿಕಾ ಇಲಾಖೆಯ ಅಧೀನದಲ್ಲಿರುವ ಭೂಮಿಯ ವಿಸೀರ್ಣವೆಷ್ಟು ;(ಜಿಲ್ಲಾವಾರು, ತಾಲ್ಲೂಕುವಾರು ಗ್ರಾಮವಾರು ಮಾಹಿತಿಯನ್ನು ನೀಡುವುದು) ಸ್ವಂತ ಕಟ್ಟಡದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕಛೇರಿಗಳ ಸಂಖ್ಯೆ ಎಷ್ಟು ; ಬಾಡಿಗೆ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿರುವ ಕಛೇರಿಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು ತಾಲ್ಲೂಕುವಾರು ಮಾಹಿತಿ ನೀಡುವುದು)

(ಆ) ಈ ಭೂಮಿಗಳಲ್ಲಿ ತೋಟಗಾರಿಕಾ ಉದ್ದೇಶಕ್ಕಾಗಿ ಬಳಕೆಯಾಗುತ್ತಿರುವ ಭೂಮಿಯ ವಿಸ್ತೀರ್ಣವೆಷ್ಟು ತೋಟಗಾರಿಕಾ ಉದ್ದೇಶಕ್ಕಾಗಿ ಬಳಕೆಯಾಗದೇ ಇರುವ ಭೂಮಿಯ ವಿಸ್ತೀರ್ಣವೆಷ್ಟು ; ತೋಟಗಾರಿಕಾ ಉದ್ದೇಶ ಹೊರತು ಪಡಿಸಿದ ಇತರ ಉದ್ದೇಶಕ್ಕಾಗಿ ಭೂಮಿಯನ್ನು ಬಳಸಲಾಗುತ್ತಿದೆಯೇ ; ಹೌದಾದಲ್ಲಿ, ಯಾವ ಉದ್ದೇಶಕ್ಕಾಗಿ ಬಳಸಲಾಗುತ್ತಿದೆ ; (ಜಿಲ್ಲಾವಾರು, ತಾಲ್ಲೂಕುವಾರು, ಗ್ರಾಮಾವಾರು ಮಾಹಿತಿಯನ್ನು ನೀಡುವುದು)

(ಇ) ತೋಟಗಾರಿಕಾ ಇಲಾಖಾ ಅಧೀನದಲ್ಲಿರುವ ಬಳಕೆಯಾಗದೇ ಖಾಲಿಯಿರುವ ಕಟ್ಟಡಗಳ ಸಂಖ್ಯೆ ಎಷ್ಟು ; ಅವುಗಳಲ್ಲಿ ಸುಸ್ಥಿತಿಯಲ್ಲಿರುವ ಮತ್ತು ಬಿದ್ದು ಹೋಗುವ ಹಂತದಲ್ಲಿರುವ ಕಟ್ಟಡಗಳ ಸಂಖ್ಯೆ ಎಷ್ಟು ; ಅವುಗಳು ಅಗತ್ಯವಿಲ್ಲವಾದಲ್ಲಿ ಸ್ಥಳೀಯ ಸಂಸ್ಥೆಗಳಿಗೆ ವರ್ಗಾಯಿಸುವ ಉದ್ದೇಶ ಸರ್ಕಾರದ ಮುಂದಿದೆಯೇ;

(ಈ) ಇಲಾಖೆಯ ಭೂಮಿಯು ಬೇರೆ ಬೇರೆ ಕಾರಣಗಳಿಂದ ಒತ್ತುವರಿಯಾಗುತ್ತಿರುವುದು ನಿಜವೇ ; ಹಾಗಿದ್ದಲ್ಲಿ, ಈ ಒತ್ತುವರಿ ತೆರವುಗೊಳಿಸಲು ಸರ್ಕಾರ ಕೈಗೊಂಡ ಕ್ರಮಗಳೇನು ?